# ಕರ್ನಾಟಕ ವಿಧಾನ ಪರಿಷತ್ತು

01. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1539
02. ಸದಸ್ಯರ ಹೆಸರು : ಶ್ರೀ ಲಹರ್ ಸಿಂಗ್ ಸಿರೋಯಾ
03. ಉತ್ತರಿಸುವ ದಿನಾಂಕ : 18.03.2021
04. ಉತ್ತರಿಸುವ ಸಚಿವರು : ಮಾನ್ಯ ಗೃಹ, ಕಾನೂನು ಮತ್ತು ಸಂಸದೀಯ ವ್ಯವಹಾರಗಳು ಹಾಗೂ ಶಾಸನ ರಚನೆ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ವಯೋಮಾನಕ್ಕೆ ತಕ್ಕಂತೆ ತೂಕ ಇಳಿಸಿಕೊಳ್ಳುವ ಸಂಬಂಧ ರಾಜ್ಯ ಪೊಲೀಸರಿಗೆ ಆದೇಶ ನೀಡಲಾಗಿದೆಯೇ; | ಎಡಿಜಿಪಿ, ಕೆ.ಎಸ್.ಆರ್.ಪಿ ಇವರ ಜ್ಞಾಪನ ಸಂಖ್ಯೆ: ಡಿಪ್ಲಾಯ್/259/2020-21, ದಿನಾಂಕ:10.02.2021 ರಲ್ಲಿ ಕೆ.ಎಸ್.ಆರ್.ಪಿ/ಐ.ಆರ್.ಬಿ ಘಟಕದ ಅಧಿಕಾರಿ / ಸಿಬ್ಬಂದಿಗಳು ಸಾಮಾನ್ಯವಾಗಿ ಹೊಂದಿರ ಬೇಕಾದ ತೂಕವನ್ನು ಅವರ ಎತ್ತರಕ್ಕೆ ಅನುಗುಣವಾಗಿ ವೈದ್ಯಕೀಯ ಸೂತ್ರದಂತೆ ನಿಗದಿಪಡಿಸಲಾಗಿರುತ್ತದೆ. |
| ಆ) | ನೀಡಿದ್ದಲ್ಲಿ, ವಿವಿಧ ವಯೋಮಾನದವರಿಗೆ ನಿಗದಿಪಡಿಸಿದ ತೂಕ, ತೂಕ ಇಳಿಸಿಕೊಳ್ಳಲು ಪೊಲೀಸ್ ಇಲಾಖೆಯಿಂದ ಕೈಗೊಂಡ ಪ್ರೋತ್ಸಾಹಕ ಕ್ರಮಗಳಾವುವು; (ವಿವರಗಳನ್ನು ಒದಗಿಸುವುದು) | ಕೆ.ಎಸ್.ಆರ್.ಪಿ/ಐ.ಆರ್.ಬಿ ಘಟಕದ ಅಧಿಕಾರಿ / ಸಿಬ್ಬಂದಿಗಳಿಗೆ ಅವರ ಎತ್ತರಕ್ಕನುಗುಣವಾಗಿ ವೈದ್ಯಕೀಯ ಸೂತ್ರದಂತೆ ನಿಗದಿಪಡಿಸಲಾಗಿರುವ ತೂಕಕ್ಕಿಂತ ಹೆಚ್ಚು ತೂಕ ಹೊಂದಿರುವ ಅಧಿಕಾರಿ / ಸಿಬ್ಬಂದಿಗಳಿಗೆ ಅವರ ವಯೋಮಾನಕ್ಕನುಗುಣವಾಗಿ ಕೆಳಕಂಡ ಕೋಷ್ಟಕದಲ್ಲಿ ನೀಡಿರುವಂತೆ ತೂಕವನ್ನು ಇಳಿಸಿಕೊಳ್ಳುವಂತೆ ಸೂಚಿಸಲಾಗಿದೆ.<br><br>ಕ್ರ.ಸಂ. / ಅಧಿಕಾರಿ / ಸಿಬ್ಬಂದಿಗಳ ವಯೋಮಿತಿ / ಇಳಿಸಬೇಕಾದ ಅಧಿಕ ತೂಕ<br>1. / 40 ವರ್ಷದೊಳಗೆ / 10 ಕೆ.ಜಿ.<br>2. / 40-50 ವರ್ಷಗಳ ವರೆಗೆ / 5 ಕೆ.ಜಿ.<br>3. / 50-55 ವರ್ಷಗಳ ವರೆಗೆ / 2.5 ಕೆ.ಜಿ.<br><br>ಅಧಿಕಾರಿ/ ಸಿಬ್ಬಂದಿಗಳು ಅಧಿಕ ತೂಕವನ್ನು ಕಡಿಮೆ ಮಾಡಿಕೊಳ್ಳುವ ಸಲುವಾಗಿ ಪ್ರತಿ ದಿನ ಬೆಳಿಗ್ಗೆ 5 ಕಿ.ಮೀ ನಡಿಗೆ ಮತ್ತು ಓಟವನ್ನು ಆಯೋಜಿಸಲಾಗುತ್ತಿದೆ. ಯೋಗ ತರಗತಿಗಳನ್ನು ನಡೆಸಲಾಗುತ್ತಿದೆ ಹಾಗೂ ನುರಿತ ವೈದ್ಯರಿಂದ ಪ್ರತಿ ದಿನ ತೆಗೆದುಕೊಳ್ಳಬೇಕಾದ ಆಹಾರ ಪದ್ಧತಿ ಮತ್ತು ಉತ್ತಮ ಆರೋಗ್ಯ ಕಾಪಾಡಿಕೊಳ್ಳುವ ಬಗ್ಗೆ ಸಲಹೆ ಮತ್ತು ಸೂಚನೆಗಳನ್ನು ಕೊಡಿಸಲಾಗುತ್ತದೆ. |
| ಇ) | ಕಡ್ಡಾಯವಾಗಿ ತೂಕ ಇಳಿಸಿಕೊಂಡು ನಿಯಮ ಪಾಲಿಸಿದವರಿಗೆ ಮಾತ್ರ ಮುಂಬಡ್ತಿ ನೀಡುವ ಕ್ರಮ ಜಾರಿಯಲ್ಲಿದೆಯೇ? | ಇಲ್ಲ |

ಒಇ/23/ಪಿಪಿಎಸ್/2021

(ಬಸವರಾಜ ಬೊಮ್ಮಾಯಿ)
ಗೃಹ, ಕಾನೂನು ಮತ್ತು ಸಂಸದೀಯ ವ್ಯವಹಾರಗಳು
ಹಾಗೂ ಶಾಸನ ರಚನೆ ಸಚಿವರು